ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ಸಹಕಾರಿ ಸಂಘಗಳ ಚುನಾವಣೆ ಬಗ್ಗೆ

ಶ್ರೀ ಐವನ್ ಡಿ' ಸೋಜಾ(ನಾಮನಿರ್ದೇಶನ ಹೊಂದಿದವರು):-

1048 (1251) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಪ್ರಸ್ತುತ ನಡೆಯುವ ಸಹಕಾರಿ ಸಂಘಗಳ ಚುನಾವಣೆಯಲ್ಲಿ ಮತದಾನ ನಡೆಸಲು ಹೈಕೋರ್ಟ್ ನಿರ್ದೇಶನವನ್ನು ತಡೆಯಲು ಮತ್ತು ಸರಿಯಾದ ನಿಯಮಗಳನ್ನು ರೂಪಿಸಲು ಸರ್ಕಾರ ವಿಫಲಗೊಂಡಿದೆಯೇ ; ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮವೇನು; (ವಿವರ ನೀಡುವುದು)

(ಆ) ಸಹಕಾರಿ ಸಂಘಗಳಲ್ಲಿ ಅಕ್ರಮ/ಕಾನೂನು ಬಾಹಿರವಾಗಿ ವ್ಯವಹಾರ ನಡೆಸಿದ ಎಷ್ಟು ಸಂಘಗಳನ್ನು ಗುರುತಿಸಿ ಕ್ರಮಕೈಗೊಳ್ಳಲಾಗಿದೆ; (ವಿವರ ನೀಡುವುದು)

(ಇ) ರಾಜ್ಯದಲ್ಲಿ ಸಹಕಾರಿ ಸಂಘಗಳು ನಷ್ಟದಲ್ಲಿ ಇರುವುದು ನಿಜವೇ; (ವಿವರ ನೀಡುವುದು)

(ಈ) ಸಹಕಾರಿ ಸಂಘಗಳ ರಕ್ಷಣೆಗೆ ಮತ್ತು ನಿಯಮಗಳನ್ನು ಅನುಷ್ಠಾನಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮವೇನು ? (ವಿವರ ನೀಡುವುದು)